# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1678

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 14.03.2022

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಹೊಸದಾಗಿ ಬಿ.ಪಿ.ಎಲ್. ಕಾರ್ಡ್ ಕೋರಿ ಅರ್ಜಿ ಸಲ್ಲಿಸಿದವರ ಸಂಖ್ಯೆ ಎಷ್ಟು; 2018 ರಿಂದ ಹೊಸದಾಗಿ ಬಿ.ಪಿ.ಎಲ್. ಕಾರ್ಡ್ ನೀಡದೇ ಇರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವಾಗ ನೀಡಲಾಗುವುದು; (ಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ಹೊಸದಾಗಿ ಆದ್ಯತಾ ಕಾರ್ಡ್ ಕೋರಿ ಅರ್ಜಿ ಸಲ್ಲಿಸಿದವರ ಸಂಖ್ಯೆ: 39,07,991<br>ಕೋವಿಡ್-19 ಲಾಕ್‌ಡೌನ್ ಅವಧಿಗಳಲ್ಲಿ ಹೊಸ ಪಡಿತರ ಚೀಟಿ ಕೋರಿ ಸಲ್ಲಿಸಿರುವ ಅರ್ಜಿಗಳ ಸ್ಥಳ ಪರಿಶೀಲನೆ ಕಾರ್ಯವು ನಿಧಾನವಾಗಿದ್ದು ಮತ್ತು ಈ ಅವಧಿಯಲ್ಲಿ ಬಯೋಮೆಟ್ರಿಕ್ ಬಳಕೆಯನ್ನು ಹಿಂಪಡೆದಿರುವ ಕಾರಣ ಪಡಿತರ ಚೀಟಿಗಳನ್ನು ವಿತರಿಸುವ ಕಾರ್ಯವನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿತ್ತು.<br>ಪ್ರಸ್ತುತ ಹೊಸ ಪಡಿತರ ಚೀಟಿ ವಿತರಿಸುವ ಕಾರ್ಯ ಜಾರಿಯಲ್ಲಿದೆ. ಪಡಿತರ ಚೀಟಿಯನ್ನು ಕೋರಿ ಅರ್ಜಿ ಸಲ್ಲಿಸಿರುವ ಅರ್ಹ ಅರ್ಜಿದಾರರಿಗೆ ಹೊಸ ಪಡಿತರ ಚೀಟಿಯನ್ನು ನೀಡುವ ಕಾರ್ಯ ಜಾರಿಯಲ್ಲಿದ್ದು, ಅರ್ಜಿಗಳ ಹಿರಿತನದ ಮೇಲೆ ಹೊಸ ಆದ್ಯತಾ ಪಡಿತರ ಚೀಟಿಗಳನ್ನು ವಿತರಿಸಲಾಗುತ್ತಿದೆ. |
| ಆ | ಗ್ರಾಮೀಣ ಪ್ರದೇಶದಲ್ಲಿ ನೆಟ್‌ವರ್ಕ್ ತೊಂದರೆಯಿಂದ ಹಾಗೂ ವಿದ್ಯುತ್ ತೊಂದರೆಯಿಂದ ಬಯೋಮೆಟ್ರಿಕ್ ನೀಡಿ ಪಡಿತರ ಪಡೆಯುವುದು ತೊಂದರೆಯಾಗುತ್ತಿದ್ದು ಈ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಆನ್‌ಲೈನ್ ಮುಖಾಂತರ ಬಯೋಮೆಟ್ರಿಕ್ ವ್ಯವಸ್ಥೆಯಡಿ ಆಹಾರಧಾನ್ಯಗಳನ್ನು ವಿತರಣೆ ಮಾಡುವಾಗ ಕೆಲವು ಸಂದರ್ಭಗಳಲ್ಲಿ ನೆಟ್‌ವರ್ಕ್ ಸಮಸ್ಯೆ ಮತ್ತು ಸರ್ವರ್ ಜನಸಂದಣಿಯಾಗುವುದನ್ನು ಸರ್ಕಾರ ಗಮನಿಸಿದೆ. ಇದಕ್ಕಾಗಿ ನ್ಯಾಯಬೆಲೆ ಅಂಗಡಿಯವರು ಸ್ಥಳೀಯವಾಗಿ ಲಭ್ಯವಿರುವ ಯಾವುದೇ ನೆಟ್‌ವರ್ಕ್ ಬಳಕೆ ಮಾಡಬಹುದು ಹಾಗೂ ಎನ್.ಐ.ಸಿ.ಯ ಸಹಯೋಗದೊಂದಿಗೆ ಅಂತಹ ಸಮಸ್ಯೆಗಳನ್ನು ಪರಿಹರಿಸಲಾಗುತ್ತಿದೆ. |

| | | |
|---|---|---|
| | | ಬಯೋಮೆಟ್ರಿಕ್ ಪಡೆಯುವಲ್ಲಿ ತೊಂದರೆ ಆಗುವ ವಯೋವೃದ್ಧರಿಗೆ ಬಯೋಮೆಟ್ರಿಕ್ ಹೊರತುಪಡಿಸಿ ಶೇ.2 ರಷ್ಟು ಫಲಾನುಭವಿಗಳಿಗೆ ಪಡಿತರ ಹಂಚಿಕೆ ನೀಡುವ ಅವಕಾಶವು ಜಾರಿಯಲ್ಲಿದೆ. ಇದಲ್ಲದೇ, ಅನಿವಾರ್ಯ ಸಂದರ್ಭಗಳಲ್ಲಿ ಪೂರ್ವಾನುಮತಿಯೊಂದಿಗೆ ಬಯೋಮೆಟ್ರಿಕ್ ಹೊರತುಪಡಿಸಿ ಆಹಾರಧಾನ್ಯ ವಿತರಣೆಗೆ ಅವಕಾಶ ನೀಡಲಾಗಿದೆ. |
| ಇ | ರೇಷನ್ ಕಾರ್ಡ್‌ಲ್ಲಿ ಕೆಲವು ವಯಸ್ಸಾದವರಿಗೆ ಬಯೋಮೆಟ್ರಿಕ್ ಬರದೆ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಯೋಮೆಟ್ರಿಕ್ ಬರದವರಿಗೆ ಪಡಿತರ ವಸ್ತು ನೀಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ಪೂರ್ಣ ವಿವರ ನೀಡುವುದು) | ಬಯೋಮೆಟ್ರಿಕ್ ಪಡೆಯುವಲ್ಲಿ ತೊಂದರೆ ಆಗುವ ವಯೋವೃದ್ಧರಿಗೆ ಬಯೋಮೆಟ್ರಿಕ್ ಹೊರತುಪಡಿಸಿ ಶೇ.2 ರಷ್ಟು ಫಲಾನುಭವಿಗಳಿಗೆ ಪಡಿತರ ಹಂಚಿಕೆ ನೀಡುವ ಅವಕಾಶವು ಜಾರಿಯಲ್ಲಿದೆ. ಇದಲ್ಲದೇ, ಅನಿವಾರ್ಯ ಸಂದರ್ಭಗಳಲ್ಲಿ ಪೂರ್ವಾನುಮತಿಯೊಂದಿಗೆ ಬಯೋಮೆಟ್ರಿಕ್ ಹೊರತುಪಡಿಸಿ ಆಹಾರಧಾನ್ಯ ವಿತರಣೆಗೆ ಅವಕಾಶ ನೀಡಲಾಗಿದೆ. |
| ಈ | ರಾಜ್ಯದಲ್ಲಿ ನ್ಯಾಯ ಬೆಲೆ ಅಂಗಡಿಯನ್ನು ರದ್ದುಪಡಿಸಿರುವುದರಿಂದ ಪಡಿತರದಾರರು ದೂರದ ನ್ಯಾಯಬೆಲೆ ಅಂಗಡಿಗೆ ಬಂದು ಪಡಿತರ ವಸ್ತು ತೆಗೆದುಕೊಳ್ಳಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸಂಚಾರಿ ನ್ಯಾಯ ಬೆಲೆ ಅಂಗಡಿಯನ್ನು ಮುಂದುವರಸಲು ಸರ್ಕಾರ ಕ್ರಮ ಕೈಗೊಂಡಿದೆಯೇ?<br>(ಪೂರ್ಣ ವಿವರ ನೀಡುವುದು) | 1. ಯಾವುದೇ ನ್ಯಾಯಬೆಲೆ ಅಂಗಡಿ ರದ್ದಾದರೆ ಆ ಪಡಿತರ ಚೀಟಿದಾರರನ್ನು ಹತ್ತಿರದ ನ್ಯಾಯಬೆಲೆ ಅಂಗಡಿಗಳಿಗೆ ನಿಯೋಜಿಸಿ ಪಡಿತರ ವಿತರಿಸಲಾಗುತ್ತದೆ. ಆನಂತರ ಅಲ್ಲಿಗೆ ಹೊಸ ನ್ಯಾಯಬೆಲೆ ಅಂಗಡಿ ಮಂಜೂರು ಮಾಡಲಾಗುತ್ತದೆ.<br>2. ರಾಜ್ಯದಲ್ಲಿ ಪ್ರಸ್ತುತ ಕೊಡಗು ಜಿಲ್ಲೆಯಲ್ಲಿ ಒಂದು ಮತ್ತು ಚಾಮರಾಜನಗರ ಜಿಲ್ಲೆಯಲ್ಲಿ ಒಂದು ಸಂಚಾರಿ ನ್ಯಾಯಬೆಲೆ ಅಂಗಡಿಯನ್ನು ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ಮೂಲಕ ನಿರ್ವಹಿಸಲಾಗುತ್ತಿದೆ. ಈ ವ್ಯವಸ್ಥೆಯು ಗುಡ್ಡಗಾಡು ಪ್ರದೇಶಗಳಿಗೆ ನೀಡಲಾಗಿದೆ.<br>3.ಬುಡಕಟ್ಟು ಹಾಡಿಗಳು/ ತಾಂಡಗಳು/ ಗೊಲ್ಲರಹಟ್ಟಿ/ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಕಾಲೋನಿ ಇತ್ಯಾದಿಗಳಂತಹ ವಿಶೇಷ ಪ್ರದೇಶಗಳಲ್ಲಿ ಕನಿಷ್ಟ 100 ಪಡಿತರ ಚೀಟಿಗಳಿಗೆ ಹೊಸ ನ್ಯಾಯಬೆಲೆ ಅಂಗಡಿಗಳನ್ನು ಅಗತ್ಯಕ್ಕೆ ಅನುಗುಣವಾಗಿ ಮಂಜೂರು ಮಾಡಲು ಅವಕಾಶವನ್ನು ಕಲ್ಪಿಸಲಾಗಿದೆ. |

ಆನಾಸ 56 ಡಿಆರ್ಎ 2022 (ಇ-ಆಫೀಸ್)

(ಉಮೇಶ ವಿ. ಕತ್ತಿ)

ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು

ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.